ಕುಂ. ಬಾ. ಸದಾಶಿವಪ್ಪ*

# ಕೂಲಹಳ್ಳಿ ಮದ್ದಾನೇಶ್ವರರ ಮಠ - ಒಂದು ಅಧ್ಯಯನ

ಮದ್ದಾನೆಸ್ವಾಮಿ, ಗುರುಬಸವರಾಜ (ಕೊಟ್ರಯ್ಯ), ಕೆಂಪಯ್ಯ, ತಿಪ್ಪೇರುದ್ರ, ಕೋಲಶಾಂತ ಎಂಬುವ ಹೆಸರುಗಳ ಐದು ಜನ ಸ್ವಾಮಿಗಳು ಯಾವ ಸ್ಥಳದಿಂದಲೋ ಬಂದು. ಬಾಗಳಿ ಕಲ್ಲೇಶ್ವರ ದೇವಾಲಯದಲ್ಲಿ ಕೆಲಕಾಲ ತಂಗಿದ್ದರು. ಇವರಿಗೆ ಪಂಚಗಣಾಧೀಶರೆಂದೂ ಕರೆಯುವರು. ಇವರ ಕಾಲದ ಬಗ್ಗೆಯೂ ಖಚಿತವಾಗಿ ತಿಳಿದು ಬಂದಿಲ್ಲ. ಉಚ್ಚಂಗಿದುರ್ಗದ ಗಂಟೆ ಶಾಸನದ ಹಾಗೂ ವಯೋವೃದ್ಧರ ಹೇಳಿಕೆಗಳನ್ನು ಗಮನಿಸಿ ಇವರ ಕಾಲ ಸುಮಾರು ೧೭ನೇ ಶತಮಾನವೆಂದು ಹೇಳಬಹುದು.

ಒಂದು ದಿನ ಪೂಜೆಗೆ ಹೋದಾಗ ಮದ್ದಾನೇಶ್ವರರಿಗೆ ತೋಟದಲ್ಲಿ ಕನಕವ್ವ ಎಂಬುವ ಸ್ತ್ರೀ ಭೇಟಿಯಾಗಿ ಅವಳಲ್ಲಿ ಅವರು ಅನುರಕ್ತರಾಗಿ ಪುನಃ ಕಲ್ಲೇಶ್ವರ ದೇವಾಲಯಕ್ಕೆ ಬರಲಿಲ್ಲವೆಂದು ಒಂದು ಹೇಳಿಕೆ ಇದ್ದರೆ, ಮತ್ತೊಂದು ಹೇಳಿಕೆಯಲ್ಲಿ ಮದ್ದಾನೇಶ್ವರರು ಹಾಲು ಮತ್ತು ಮೊಸರು ತರಲು ಊರೊಳಗೆ ಹೋದವರು ಕನಕವ್ವಳನ್ನು ಪ್ರೀತಿಸಿ ಅಲ್ಲಿಯೇ ಉಳಿದರು. ಮದ್ದಾನೇಶ್ವರರು ಬಾರದೆ ಇದ್ದುದನ್ನು ಕಂಡು ಉಳಿದ ಗಣಾಧೀಶರು ಬಾಗಳಿಯಿಂದ ಹೊರಟು ಹರಪನಹಳ್ಳಿಯಲ್ಲಿ ಕೆಂಪೇಶ್ವರರು, ಅರಸೀಕೆರೆಯಲ್ಲಿ ಕೋಲಶಾಂತರು, ಕೊಟ್ಟೂರಿನಲ್ಲಿ ಗುರುಬಸವರಾಜರು, ನಾಯಕನಹಟ್ಟಿಯಲ್ಲಿ ತಿಪ್ಪೇರುದ್ರರು ಉಳಿದು, ಆಯಾ ಸ್ಥಳಗಳಲ್ಲಿ ಭಕ್ತಾದಿಗಳನ್ನು ಆಕರ್ಷಿಸಿದ ವಿಷಯ ಬಳ್ಳಾರಿ ಮತ್ತು ಚಿತ್ರದುರ್ಗದ ಜನರಿಗೆ ಹೊಸದೇನಲ್ಲ.

ಕನಕವ್ವ ಮತ್ತು ಮದ್ದಾನೇಶ್ವರ ಪುತ್ರನಾಗಿ ಜನಿಸಿದ ಮಗುವೇ ಗೋಣಿಬಸವೇಶ್ವರ. ಇವನ ಜನನವಾದ ಕೂಡಲೇ ಕನಕವ್ವ ಕಾಲವಶವಾಗುವಳು. ಆ ನಂತರ ಮದ್ದಾನೇಶ್ವರರು ಕೂಲಹಳ್ಳಿ ಬಿಟ್ಟು ಬಳ್ಳಾರಿಗೆ ಹೋಗಿ ಕೊನೆವರೆಗೂ ಅಲ್ಲಿಯೇ ನೆಲೆಸಿದರು. ಈ ವಿಷಯ ಜನ ಸಾಮಾನ್ಯರ ಆಡು ಮಾತುಗಳಿಂದ ನಮಗೆ ಗೊತ್ತಾಗುತ್ತದೆ. ಗೋಣಿ ಬಸವೇಶ್ವರನನ್ನು ಹತ್ತಿರದ ಸಂಬಂಧಿಗಳು ಸಾಕಿದರು. ಸುಮಾರು ೭–೮ ವರ್ಷ ಪ್ರಾಯಕ್ಕೆ ಬಂದ ಮೇಲೆ ಅವರು ಬಾಗಳಿಯ ಶ್ರೀಮಂತ ರೈತರಾದ ಗೌಡರಲ್ಲಿ ಊಳಿಗಕ್ಕೆ ನಿಂತರು. ವಯೋವೃದ್ಧರ ಹೇಳಿಕೆಯಂತೆ ಮದ್ದಾನೇಶ್ವರರು ಕೂಲಹಳ್ಳಿಯಲ್ಲಿ ವಾಸಿಸಿದ ಕಾಲ ಎರಡು ಮೂರು ವರ್ಷಗಳು ಮಾತ್ರ.

ಬಾಗಳಿಯಿಂದ ಉತ್ತರ ದಿಕ್ಕಿನಲ್ಲಿ ಸುಮಾರು ೩/೪ ಕಿ.ಮೀ. ದೂರದಲ್ಲಿ ಕಾಣುವ ಹಳ್ಳಿಯೇ ಕೂಲಹಳ್ಳಿ. ಈ ಹಳ್ಳಿಯಲ್ಲೇ ಗೋಣಿಬಸವೇಶ್ವರ ಮತ್ತು ಮದ್ದಾನೇಶ್ವರ ಎರಡು ಮಠಗಳು ಇರುವುವು. ಗೋಣಿ ಬಸವೇಶ್ವರರು ಮದ್ದಾನೇಶ್ವರರು ಪುತ್ರರು. ಗೋಣಿಬಸವೇಶ್ವರ ಮಠ ಚಿಕ್ಕದು. ಇದು ಆಧುನಿಕ ಕಟ್ಟಡವನ್ನು ಹೊಂದಿದೆ. ಮದ್ದಾನೇಶ್ವರರ ಮಠವು ಪ್ರಾಚೀನ ಕಾಲದ ಕಟ್ಟಡವು, ಇದು ವಿಶಾಲವಾಗಿದ್ದು, ಜಾತ್ರೆಯ ಭಕ್ತಾದಿಗಳಿಗೆ ಹೆಚ್ಚು ಆಕರ್ಷಕವಾಗಿರುತ್ತದೆ. ಈ ಮಠಕ್ಕೆ ಹೊರ ಸುತ್ತಿನ

* ಶಂಕರಮಠದ ಹತ್ತಿರ, ಹೊಸಪೇಟೆ ರಸ್ತೆ, ಹರಪನಹಳ್ಳಿ, ಬಳ್ಳಾರಿ ಜಿಲ್ಲೆ-೫೮೩೧೩೧

ಎರಡು ಕಲ್ಲು ಗೋಡೆಗಳಿರುವುವು. ಪ್ರಾಂಗಣದ ಒಳ ಭಾಗದ ಅಳತೆ ಹೀಗಿದೆ :

ಪೂರ್ವ ಮತ್ತು ಪಶ್ಚಿಮ – ಅಗಲು – ೨೮೦ ಅಡಿಗಳು

ಉತ್ತರ ಮತ್ತು ದಕ್ಷಿಣ – ಉದ್ದ – ೫೧೧ ಅಡಿಗಳು

ಮಠದ ದಕ್ಷಿಣದ ಕೊನೆಯ ಆವರಣ ಗೋಡೆಯ ಹಿಂಭಾಗದಲ್ಲಿ ೪ ಗೋಡೆಗಳ ಸಾಲುಗಳು ಪೂರ್ವ ಮತ್ತು ಪಶ್ಚಿಮ--೧೯೮ ಅಡಿಗಳು ಉತ್ತರ ಮತ್ತು ದಕ್ಷಿಣ–೧೬೦ ಅಡಿಗಳ ಖಾಲಿ ಸ್ಥಳ. ಸ್ವಲ್ಪ ದೂರದಲ್ಲಿ ಒಂದು ಹೊಡೇವು ಕಾಣುವುದು.

ಈ ಮಠಕ್ಕೆ ಮೂರು ದ್ವಾರಗಳಿರುವುವು. ಮೊದಲ ದ್ವಾರ ಸಾಮಾನ್ಯವಾಗಿರುವುದು. ಎರಡನೇ ದ್ವಾರದ ಮೊದಲು ಮೆಟ್ಟಲಿಗೆ ಬಲಗಡೆ ಆನೆ, ಎಡಗಡೆ ಸಿಂಹದ ಶಿಲ್ಪಗಳು, ದ್ವಾರದ ಮೇಲ್ಭಾಗದಲ್ಲಿ ಆಂಜನೇಯನ ಮೂರ್ತಿ ಇರುವುದು. ಈ ದ್ವಾರ ಅಂತಸ್ತುಗಳಿಂದ ಕೂಡಿದ ಮಂಟಪ. ಇದರಿಂದ ಮೂರನೇ ದ್ವಾರಕ್ಕೆ ಬರುವಾಗ ಅಂದರೆ ಎರಡು ಮತ್ತು ಮೂರನೇ ದ್ವಾರಗಳ ಮಧ್ಯ ಕಟ್ಟೆಗಳು ಕಾಣುವುವು. ಈ ಕಟ್ಟೆಗಳಲ್ಲಿ ಉಬ್ಬು ಶಿಲ್ಪದ ಕೆಲವು ಚಿತ್ರಗಳು ಕಾಣುವುವು. ಅವುಗಳಲ್ಲಿ ಕೆಲವು ಮಿಥುನ ಶಿಲ್ಪಗಳು. ಮೂರನೇ ದ್ವಾರವನ್ನೂ ಹಾದು ಮಠದ ಒಳಗಡೆ ಹೋದರೆ ಅಲ್ಲಿ ಎಡಕ್ಕೂ ಮತ್ತು ಬಲಕ್ಕೂ ಎರಡು ವಿಶಾಲ ಪಡಸಾಲೆಗಳು ಇರುವುವು. ಗರ್ಭಗೃಹದಲ್ಲಿಯ ಪೀಠ, ಅದರ ಮೇಲೆ ಅರಳಿಯ ಗಾದಿ, ಅದರ ಮೇಲೆ ಮುದ್ದಾನೇಶ್ವರ ಮೂರ್ತಿ. ಅದರ ಮುಂದೆ ಒಂದು ಕುಡುಗೋಲು. ಇದು ಗೋಣಿಬಸವೇಶ್ವರದೆಂದು ಹೇಳುವರು. ಆದರೆ ಅದರಲ್ಲಿ ಯಾವ ಬರವಣಿಗೆಯಿಲ್ಲ. ಈ ಮಠದಲ್ಲಿ ನಾಲ್ಕು ಗುಹೆಗಳು ಕಾಣುವುವು. ಮಠವನ್ನು ಪ್ರವೇಶಿಸಿದಾಗ ಬಲಭಾಗಕ್ಕೆ ಒಂದು ಗುಹೆ ; ಅದರಲ್ಲಿ ಒಂದು ಬಾವಿಯಿದೆ, ಎಡಭಾಗದಲ್ಲಿ ಒಂದು ಗುಹೆ, ಅದರಲ್ಲಿ ಏನೂ ಇಲ್ಲ, ಉಳಿದ ಅಂದರೆ ಮೂರನೇ ಗುಹೆಯಲ್ಲಿ ಮೊದಲ ದ್ವಾರದಿಂದ ಮತ್ತೊಂದು ದ್ವಾರದವರೆಗೂ ಗೋಡೆಗೆ ಹೊಂದಿಕೊಂಡು ೩.೧/೨ ಅಡಿ ಎತ್ತರದ ಕಟ್ಟೆಯಲ್ಲಿ ೨೨ ಹೊಡೇವುಗಳು (೨೫ ಕೆ.ಜಿ. ಯಿಂದ ೪೫ ಕೆ.ಜಿ. ವರೆಗೂ ಧಾನ್ಯಗಳನ್ನು ತುಂಬಲಿಕ್ಕೆ ಸಾಧ್ಯತೆ ಇದೆ) ಅವುಗಳ ಮೇಲೆ ಗೋಡೆಯ ಶಿಲ್ಪಗಳಲ್ಲಿ ಸುಂದರ ಉಬ್ಬು ಚಿತ್ರಗಳು ಕಾಣುವುವು.

ನಾಲ್ಕನೇ ಗುಹೆಯಲ್ಲಿ ಎರಡು ಬಾವಿಗಳಿರುವುವು. ಮೊದಲ ಬಾವಿ ಉದ್ದ–೩ ಅಡಿ, ಅಗಲ–೬ ಅಡಿ, ಉಪ್ಪು ನೀರು, ಎರಡನೇ ಬಾವಿ ಉದ್ದ–೧೫ ಅಡಿ, ಅಗಲ–೧೦ ಅಡಿ, ಸಿಹಿ ನೀರು. ಇದರಲ್ಲಿಯೇ ದ್ವಾರದಿಂದ ದ್ವಾರದವರೆಗೂ ೪ ಅಡಿ ಉದ್ದ, ೪ ಅಡಿ ಅಗಲವುಳ್ಳ ೧೬ ಗೂಡುಗಳು, ೬ ಅಡಿ ಉದ್ದ, ೪ ಅಡಿ ಅಗಲವುಳ್ಳ ೪ ಗೂಡುಗಳು. ಒಟ್ಟಿಗೆ ೨೦ ಗೂಡುಗಳು ಇವೆ. ಅವುಗಳ ಬಾಗಿಲುಗಳಿಗೆ ೨೦ ಅಂಗುಲ ಉದ್ದ, ೨೦ ಅಂಗುಲ ಅಗಲವುಳ್ಳ ಕಲ್ಲುಗಳ ಚೌಕಟ್ಟುಗಳು ಇರುವುವು.

ಮಠದ ಹಿಂಭಾಗದಲ್ಲಿ ಒಂದು ಕಲ್ಲಿನ ಹೊಡೇವು ಇರುವುದು. ಮಠದ ಮೇಲ್ಭಾಗದಲ್ಲಿ ಹಿಂದುಗಡೆ ಮುಸ್ಲಿಂ ವಾಸ್ತು ಶೈಲಿಯ ಒಂದು ಎತ್ತರದ ನಮೂನೆ ಇದ್ದರೆ ಮುಂಭಾಗದಲ್ಲಿ ಬಸವಣ್ಣನ ಮೂರ್ತಿ ಕಂಡು ಬರುವುದು. ಅಲ್ಲಲ್ಲಿ ಅಂಜನೇಯನ ಚಿತ್ರಗಳು ಕಂಡು ಬರುವುವು.

ನಿಮರ್ಶೆ

೧) ಈ ಮಠವು ವಾಸ್ತುಶಿಲ್ಪ ದೃಷ್ಟಿಯಿಂದ ಹೇಳಿಕೊಳ್ಳುವಂಥದ್ದೇನು ಅಲ್ಲ. ಆದರೂ ಬೃಹದಾಕಾರವಾಗಿದೆ. ವಿಶಾಲವಾದ ಪ್ರಾಂಗಣವಿದೆ. ಇದನ್ನು ಅಲ್ಪ ಕಾಲದಲ್ಲಿ ಶ್ರೀ ಮುದ್ದಾನೇಶ್ವರರಿಗೆ ಭಕ್ತರು ಕಟ್ಟಿಕೊಟ್ಟಿರುವರೆ ?

೨) ಮಠಕ್ಕೆ ಹಿಂದಿನ ಭಾಗದಲ್ಲಿ ಹೊಡೇವು ಇದೆ. ಮಠಗಳಲ್ಲಿ ಹೊಡೇವು ಏಕೆ ಇರುತ್ತದೆ ?

೩) ಮಠದಲ್ಲಿ ನಾಲ್ಕು ಗುಹೆಗಳು ಇರುವುವು ಈ ತೆರನಾದ ಗುಹೆಗಳು ಮಠಗಳಲ್ಲಿರುವುದು ಅಪರೂಪದ ಸಂಗತಿ.

೪) ಗುಹೆಗಳು ಒಂದು ವೇಳೆ ಇದ್ದರೂ ಅವುಗಳಲ್ಲಿ ಹೊಡೇವು ಮತ್ತು ಚಿಕ್ಕ ಚಿಕ್ಕ

ಗೂಡುಗಳು ಹಾಗೂ ಮೂರು ಬಾವಿಗಳಿರುವುದು ಏಕೆ ?

೫) ಮಠದಲ್ಲಿ ಕಂಡು ಬರುವ ಉಬ್ಬು ಶಿಲ್ಪಗಳಲ್ಲಿ ಹೆಚ್ಚಾಗಿ ಶ್ರೀ ಆಂಜನೇಯ ದೇವರ ಮೂರ್ತಿಗಳು ಇರುವುವು.

೬) ಮಠದಲ್ಲಿ ಈಗಿರುವ ಶ್ರೀ ಮುದ್ದಾನೇಶ್ವರರ ಮೂರ್ತಿಯನ್ನು ಸ್ಥಾಪಿಸಿರುವ ಕಟ್ಟೆ ಸಾಮಾನ್ಯವಾದ ಈಗಿನ ಕಾಲದ ಕಟ್ಟೆಯಾಗಿದೆ.

೭) ಮಠದ ಯಾವ ಭಾಗದಲ್ಲಿಯೂ ಮುದ್ದಾನೇಶ್ವರರ ಅಥವಾ ಯೋಗಿಗಳ, ಸ್ವಾಮಿಗಳ, ಸಾಧು–ಸಂತರ, ಸಂನ್ಯಾಸಿಗಳ ಚಿತ್ರಗಳು ಕಂಡು ಬರುವುದಿಲ್ಲ.

೮) ಬಾಗಳಿಯ ಅನೇಕ ದೇವಾಲಯಗಳ ಶಿಲ್ಪಗಳನ್ನು ಇಲ್ಲಿಗೆ ತಂದು ಈ ಕಟ್ಟಡಕ್ಕೆ ಜೋಡಿಸಿದಂತೆ ಕಂಡು ಬರುವುದು.

೯) ಹರಪನಹಳ್ಳಿ ಪಾಳೇಗಾರರ ಆರಾಧ್ಯ ದೇವರು ಆಂಜನೇಯ ಮತ್ತು ಉಚ್ಚಂಗೆಮ್ಮ. ಈ ಕಟ್ಟಡದಲ್ಲಿ ಕಂಡು ಬರುವ ಆಂಜನೇಯ ಅವರ ಮನೆ ದೇವರೇ ಇರಬೇಕು.

೧೦) ಹಿಂದಿನ ಕಾಲದಲ್ಲಿ ರೈತರ ದವಸ–ಧಾನ್ಯಗಳನ್ನು ಹಗೇವು, ಕಣಜ, ಪಾಡೇವುಗಳಲ್ಲಿ ಸಂಗ್ರಹಿಸುತ್ತಿದ್ದರು. ಈ ತೆರನಾದ ಪಾಡೇವುಗಳು ಗುಹೆಗಳಲ್ಲಿ ಕಂಡು ಬರುವುದರಿಂದ ಇವುಗಳನ್ನು ಅರಸರು ಸಂಪತ್ತನ್ನು (ನಾಣ್ಯ) ಸಂಗ್ರಹಿಸಲಿಕ್ಕೆ ಬಳಸಿಕೊಂಡಿರಬೇಕು.

೧೧) ಇದರ ಗುಹೆಗಳು, ಬಾವಿಗಳು, ಅರಸರು ಗುಪ್ತವಾಗಿ ಅಡಗಿಕೊಳ್ಳಲು, ತಪ್ಪಿಸಿಕೊಂಡು ಬೇರೆ ಕಡೆಗೆ ಪಲಾಯನ ಮಾಡಲು ನಿರ್ಮಿಸಿದವು ಆಗಿರಬೇಕು.

೧೨) ಹೂಡೇವು ಬರುವ ಶತ್ರುಗಳನ್ನು ನಿರೀಕ್ಷಿಸಲು ನಿರ್ಮಿಸಿರಬೇಕು.

೧೩) ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ, ನೊಳಂಬ, ಹರಪನಹಳ್ಳಿ ಪಾಳೇಗಾರರ ಆಳ್ವಿಕೆಗೆ ಬಾಗಳಿಪಟ್ಟಣ ಒಳಗಾಗಿದ್ದು, ಇತಿಹಾಸದಿಂದ ನಮಗೆ ತಿಳಿಯುತ್ತದೆ. ಬಾಗಳಿ ಪಟ್ಟಣ ಈಗಿರುವ ಕೂಲಹಳ್ಳಿ ಗ್ರಾಮದವರೆಗೂ ವ್ಯಾಪಿಸಿದ್ದಿತ್ತೆಂದು ಹೇಳಲಾಗಿದೆ. ಮೇಲಿನ ಕೆಲವು ಅಂಶಗಳನ್ನು ಗಮನಿಸಿದರೆ ಈ ಮಠ ಬಾಗಳಿ ರಾಜ್ಯವನ್ನು ಆಳಿದ ಅರಸರ ಆರಾಧ್ಯ ದೇವರ ದೇವಾಲಯ ಮತ್ತು ಅರಮನೆ ಪ್ರದೇಶ ಇರಬೇಕು. ಎಂಬುವ ನನ್ನ ಊಹೆಯನ್ನು ಬಲಪಡಿಸುತ್ತದೆ. ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. ಹೆಚ್ಚಿನ ಸಂಶೋಧನೆಗೆ ಅವಕಾಶವನ್ನು ಕಲ್ಪಿಸಿದೆ.

## ಆಧಾರಗಳು

೧) ವಾಸ್ತುಶಿಲ್ಪ, ೨) ಹೂಡೇವು, ೩) ಗೋಡೆಗಳು, ೪) ಪ್ರಾಂಗಣ, ೫) ಗುಹೆಗಳು, ೬) ಬಾವಿಗಳು, ೭) ಪಾಡೇವುಗಳು, ೮) ಗೂಡುಗಳು, ೯) ವಯೋವೃದ್ಧರ ಹೇಳಿಕೆಗಳಲ್ಲಿ ದಟ್ಟವಾಗಿ ಪ್ರಸಾರವಾದ ಮಾಹಿತಿಗಳು, ೧೦) ಉಚ್ಚಂಗೆಮ್ಮನ ಗಂಟೆ ಶಾಸನ, ೧೧) ಗೋಣಿ ಬಸವೇಶ್ವರ ನಾಟಕ, ೧೨) ಹರಪನಹಳ್ಳಿ ಪಾಳೇಗಾರರಿಗೆ ಸಂಬಂಧಿಸಿದ ಒಂದು ಹಳೇ ಪಾಯಿಲೆ ಹಾಗೂ ೧೪) ಮಠಕ್ಕೆ ಸಂಬಂಧಿಸಿದ ಚಿತ್ರಗಳು.